# ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 530
ಸದಸ್ಯರ ಹೆಸರು : ಶ್ರೀ ಬಸವರಾಜ ಪಾಟೀಲ್ ಇಟಗಿ
(ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು))
ಉತ್ತರಿಸುವ ದಿನಾಂಕ : 16.09.2021
ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ ಸಂ. | ಪ್ರಶ್ನೆಗಳು | ಉತ್ತರಗಳು |
| --- | --- | --- |
| ಅ | ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ತಿಂತಿಣಿ ಬ್ರಿಡ್ಜ್ ಹತ್ತಿರ (Balancing Reservoir) ಸಮತೋಲನಾ ಜಲಾಶಯ ನಿರ್ಮಾಣ ಕಾಮಗಾರಿಯು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ<br><br>ಸರ್ಕಾರವು 2020-21ನೇ ಸಾಲಿನ ಆಯವ್ಯಯ ಭಾಷಣದಲ್ಲಿ ರಾಯಚೂರು, ಯಾದಗಿರಿ, ಕಲಬುರಗಿ ಭಾಗದ ಜನರಿಗೆ ಕುಡಿಯುವ ನೀರಿನ ಸರಬರಾಜಿಗೆ ಅನುಕೂಲವಾಗುವಂತೆ ತಿಂತಿಣಿ ಬ್ರಿಡ್ಜ್ ಬಳಿ ಕೃಷ್ಣಾ ನದಿಗೆ ಜಲಾಶಯ ನಿರ್ಮಿಸಲು ಉದ್ದೇಶಿಸಿ, ವಿಸ್ತೃತ ಯೋಜನಾ ವರದಿಯನ್ನು ತಯಾರಿಸಲು ಕ್ರಮ ವಹಿಸಲಾಗುವುದರ ಕುರಿತಾಗಿ ಘೋಷಣೆ ಮಾಡಿದೆ. |
| ಆ | ಬಂದಿದ್ದಲ್ಲಿ, ಎಷ್ಟು ಟಿ.ಎಂ.ಸಿ. ನೀರಿನ ಸಂಗ್ರಹಣೆಯಾಗುವುದು; | ತಿಂತಿಣಿ ಬ್ರಿಡ್ಜ್ ಹತ್ತಿರ ಶೇಖರಣಾ ಜಲಾಶಯವನ್ನು ನಿರ್ಮಾಣ ಮಾಡುವ ಯೋಜನೆಗೆ ವಿಸ್ತೃತ ಸರ್ವೇ ಕಾರ್ಯ ಕೈಗೊಂಡು, ತಾಂತ್ರಿಕ ವಿಶ್ಲೇಷಣಾ ವರದಿಯೊಂದಿಗೆ ವಿವರವಾದ ಯೋಜನಾ ವರದಿಯನ್ನು ತಯಾರಿಸಲು ಸಮಾಲೋಚಕರನ್ನು ನೇಮಿಸುವ ಟೆಂಡರ್ ಪ್ರಕ್ರಿಯೆಯು ಕೃಷ್ಣಾ ಭಾಗ್ಯ ಜಲ ನಿಗಮದಲ್ಲಿ ಅನುಮೋದನೆ ಹಂತದಲ್ಲಿದೆ.<br><br>ವಿಸ್ತೃತ ಸರ್ವೇ ಕಾರ್ಯ ಕೈಗೊಂಡು ತಾಂತ್ರಿಕ ವಿಶ್ಲೇಷಣಾ ವರದಿಯನ್ನು ತಯಾರಿಸಿದ ನಂತರ ನಿರ್ದಿಷ್ಟ ನೀರಿನ ಸಂಗ್ರಹಣಾ ವಿವರಗಳು ಲಭ್ಯವಾಗಲಿವೆ. |
| ಇ) | ಈ ಕಾಮಗಾರಿಯನ್ನು ಯಾವಾಗ ಕೈಗೆತ್ತಿಕೊಳ್ಳಲಾಗುವುದು? | ತಿಂತಿಣಿ ಬ್ರಿಡ್ಜ್ ಹತ್ತಿರ ಶೇಖರಣಾ ಜಲಾಶಯವನ್ನು ನಿರ್ಮಾಣ ಕುರಿತ ಸರ್ವೇ ತನಿಖಾ ಕಾರ್ಯ ಪೂರ್ಣಗೊಂಡ ನಂತರ ವಿಸ್ತೃತ ಯೋಜನಾ ವರದಿಯನ್ನು ತಯಾರಿಸಿ, ಯೋಜನೆಯ ತಾಂತ್ರಿಕ ಮತ್ತು ಆರ್ಥಿಕ ಸಾಧ್ಯಾ ಸಾಧ್ಯತೆಗಳನ್ನು ಪರಿಶೀಲಿಸಿ ಮುಂದಿನ ಕ್ರಮ ಜರುಗಿಸಲಾಗುವುದು. |

ಸಂಖ್ಯೆ:ಜಸಂಇ 87 ಡಬ್ಲ್ಯುಬಿಎಂ 2021

(ಗೋವಿಂದ ಎಂ.ಕಾರಜೋಳ)
ಜಲ ಸಂಪನ್ಮೂಲ ಸಚಿವರು